

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1520 (1719)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಕುಮಾರ್ ನಾಯ್ಕ್ ವರದಿಯ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಜಾರಿಗೊಳಿಸುತ್ತಿರುವ ಬಗ್ಗೆ

(ಅ) ಸರ್ಕಾರಿ/ಅನುದಾನಿತ ಪ್ರೌಢಶಾಲಾ ಶಿಕ್ಷಕರು/ಮುಖ್ಯೋಪಾಧ್ಯಾಯರು ಹಾಗೂ ಪದವಿ ಪೂರ್ವ ಕಾಲೇಜು ಉಪನ್ಯಾಸಕರಿಗೆ 01.06.2016ರಲ್ಲಿ ನೀಡಲಾದ ಕುಮಾರ್ ನಾಯ್ಕ್ ವರದಿ ಅನ್ವಯ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು 01.11.2018ಕ್ಕೆ ಮೂಲವೇತನದೊಂದಿಗೆ ವಿಲೀನಗೊಳಿಸಲಾಗಿತ್ತೇ;

(ಆ) ಸರ್ಕಾರದ ಈ ಗೊಂದಲಗಳಿಂದಾಗಿ ಸದರಿ ನೌಕರರಿಗೆ 01.06.2016ರಿಂದ 01.11.2018ರವರೆಗೆ ಪಡೆಯಲಾದ ವೇತನ ಭತ್ಯೆಗಳನ್ನು ಮರು ವಸೂಲಿ ಮಾಡುತ್ತಿರುವುದು ನಿಜವೇ;

(ಇ) 2010, 2013 ರ ಬ್ಯಾಚ್‌ನ ಶಿಕ್ಷಕರು ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಪಡೆಯದೆ ಸೌಲಭ್ಯದಿಂದ ವಂಚಿತರಾಗಿದ್ದು ವೇತನ ತಾರತಮ್ಯಕ್ಕೆ ಕಾರಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) 01.06.2016 ರಿಂದಲೇ ಕುಮಾರ್ ನಾಯ್ಕ್ ವರದಿ ಅನ್ವಯ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಅವರವರ ಮೂಲವೇತನದಲ್ಲಿ ವಿಲೀನಗೊಳಿಸಲು ಸರ್ಕಾರದ ಕ್ರಮವೇನು?

(ಉ) ಸಿ ಮತ್ತು ಡಿ ದರ್ಜೆ ನೌಕರರುಗಳಿಗೆ ಒಮ್ಮೆ ಪಾವತಿಸಿದ ವೇತನ ಭತ್ಯೆಗಳನ್ನು ಮರು ವಸೂಲಿ ಮಾಡುವಂತಿಲ್ಲ ಎಂದು ಕೆ.ಎ.ಟಿ ಹಾಗೂ ಸರ್ವೋಚ್ಚ ನ್ಯಾಯಾಲಯಗಳ ತೀರ್ಪುಗಳಿದ್ದರೂ ಸಹ ದಿ:01.06.2016ರಿಂದ 01.11.2018ರವರೆಗೆ ನೌಕರರುಗಳಿಗೆ ಪಾವತಿಸಲಾದ ಹೆಚ್ಚುವರಿ ವೇತನ ಬಡ್ತಿ ಭತ್ಯೆಯನ್ನು ವಸೂಲಿ ಮಾಡುತ್ತಿರುವುದು ಸರಿಯೇ? (ವಿವರ ಒದಗಿಸುವುದು)